ಸದನದಲ್ಲಿ ಉತ್ತರಿಸುವ ಪ್ರಶ್ನೆ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಸೋಮವಾರ, ದಿನಾಂಕ: 15ನೇ ಜುಲೈ, 2019

ಟೆಂಡರ್ ನಿಯಮಾವಳಿಗಳನ್ನು ಪಾಲಿಸದಿರುವ ಬಗ್ಗೆ

ಡಾ: ವೈ.ಎ. ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ) -

13 (83) ಸಮಾಜ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ಸಮಾಜ ಕಲ್ಯಾಣ ಇಲಾಖೆಯ ಅಡಿಯಲ್ಲಿ ಬರುವ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘಕ್ಕೆ 2017-18ನೇ ಸಾಲಿನ ಕಟ್ಟಡ ಹಾಗೂ ಮೂಲ ಸೌಲಭ್ಯಗಳಿಗೆ ಮೀಸಲಿಟ್ಟ ಯೋಜನಾ ಮೊತ್ತವೆಷ್ಟು ;

(ಆ) ಜನವರಿ-2018 ರಿಂದ ಮಾರ್ಚ್-2018ರೊಳಗೆ ಈ ಸಂಘದಲ್ಲಿ ರೂ. 2176.00 ಕೋಟಿ ಮೊತ್ತಕ್ಕೆ ಟೆಂಡರ್ ಕರೆದು ಕಾರ್ಯಾದೇಶ ಕೊಟ್ಟಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಇ) ಬಂದಿದ್ದಲ್ಲಿ, ಟೆಂಡರ್‌ನ ಮೊತ್ತವೆಷ್ಟು ; (ಟೆಂಡರ್ದಾರರ ಹೆಸರು, ಟೆಂಡರ್, ಕಾರ್ಯಾದೇಶ ನೀಡಿದ ದಿನಾಂಕ ನೀಡುವುದು)

(ಈ) ಮೇಲ್ಕಂಡ ಸಂಘದಲ್ಲಿ ಟೆಂಡರ್ ನಿಯಮಾವಳಿಗಳಿಗೆ ತಿದ್ದುಪಡಿ ಮಾಡಿ, ನಿಯಮಾವಳಿಗಳನ್ನು ಪಾಲಿಸದೆ ಮನಬಂದಂತೆ ಭ್ರಷ್ಟಾಚಾರವೆಸಗಿ ಸಂಘಕ್ಕೆ ನೂರಾರು ಕೋಟಿಗಳಷ್ಟು ನಷ್ಟು ಉಂಟು ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಉ) ಬಂದಿದ್ದಲ್ಲಿ, ಈ ಸಂಬಂದ ಕೈಗೊಂಡ ಕ್ರಮಗಳೇನು ? (ಮಾಹಿತಿ ನೀಡುವುದು)